# ನಮ್ಮ ಕಾವ್ಯ

1990





ಸ್ವರಚಿತ ಕವನ ನಿವೇದನಾ ಬಳಗ
ಭರತೇಶ ಮೆಡಿಕಲ್ಸ್ ಹೂವಿನಹಡಗಲಿ

# ನಮ್ಮ ಕಾವ್ಯ-ಗಣಂ






ಸ್ವರಚಿತ ಕವನ ನಿವೇದನಾ ಬಳಗ
ಭರತೇಶ ಮೆಡಿಕಲ್ಸ್, ಹೂವಿನಹಡಗಲಿ.

ನಮ್ಮ ಕಾವ್ಯ-೧೯೯೦
(ವಿವಿಧ ಕವಿಗಳ ಕವನ ಸಂಕಲನ)

ಪ್ರಕಾಶನ : ಸ್ವರಚಿತ ಕವನ ನಿವೇದನಾ ಬಳಗ, ಭರತೇಶ ಮೆಡಿಕಲ್ಸ್,
ಹೂವಿನಹಡಗಲಿ-583219







ಬೆಲೆ : ೫-೦೦

ನಮ್ಮ-ಕಾವ್ಯ

ಸಂಪಾದಕ : **ಜಿ. ಪದ್ಮರಾಜ,**
ಸ್ವರಚಿತ ಕವನ ನಿವೇದನಾ ಬಳಗ
ಭರತೇಶ ಮೆಡಿಕಲ್ಸ್, ಹೂವಿನಹಡಗಲಿ.

ಮುಖಪುಟ ವಿನ್ಯಾಸ : ಶ್ರೀ ಪದ್ಮನಾಭ.

ಮುದ್ರಣ : ಚಂದ್ರು ಪ್ರಿಂಟರ್ಸ್,
ತೋಟದ ರಸ್ತೆ ಹೂವಿನಹಡಗಲಿ.

# ನಮ್ಮ ಮಾತು

1990 ರ ಸುಂದರ ಸಂಜೆಯದು. ವಾಯು ವಿಹಾರಕ್ಕೆ ಮಿತ್ರ ಪದ್ಮರಾಜರೊಡನೆ ಹೊರಟಿದ್ದೆ. ಮಾತಿನ ಎಳೆಗಳು ಅದು-ಇದು ಎನ್ನುತ್ತಾ ಸಾಹಿತ್ಯದಡೆ ಬಂದು ಭಟ್ಟೀ-ನಾವೆಲ್ಲ ಸ್ನೇಹಿತರು ಸೇರಿ ಸ್ವರಚಿತ ಕವನ ಬಳಗದಿಂದ ಕವನ ಸಂಕಲನ ಒಂದನ್ನು ಹೊರ ತಂದರೆ ಹೇಗೆ ? ಬೀಜ ಭೂಮಿಗೆ ಬಿತ್ತು ಮೊಳಕೆಯಾಗಿ ಸಸಿಯಾಗಿ ಸುಂದರಗಿಡವಾಗಿ ಅದರಲ್ಲಿ ಬಿಟ್ಟ ಹೂ ಈಗ ನಿಮ್ಮಲ್ಲಿದೆ.

ಈ ಸಂಕಲನ ಹೊರತರುವ ಮುನ್ನ ಪಟ್ಟ ಪಾಡು ಅದರ ಹೊಣೆಗಾರರಿಗೇ ಗೊತ್ತು ಸರಿಯಾದ ಸಹಕಾರ ನಮ್ಮಲ್ಲಿ ಸಿಗಲಿಲ್ಲ. ಆದರೂ ಮುನ್ನುಗ್ಗಿ ಹಲವು ಕವಿತೆ ಸಂಗ್ರಹಿಸಿ ಈ ಸಂಕಲನ ನಿಮ್ಮ ಮುಂದಿಡುತ್ತಿದ್ದೇವೆ.

ಇಲ್ಲಿ ಅರಳಿರುವ ಕಾವ್ಯ ಕುಸುಮಗಳು ಕೆಲವು ನೋಡಲು ಸುಂದರವಾಗಿವೆ ಕೆಲವು ಸುವಾಸನೆ ಭರಿತವಾಗಿವೆ. ಕೆಲವು ಅರಬಿರಿದ ಮೊಗ್ಗುಗಳೂ ಇಲ್ಲಿವೆ. ಅವುಗಳನ್ನು ಓದುಗರಾದ ನೀವೆ ಆಯ್ದುಕೊಳ್ಳಿ.

ಈ ನಮ್ಮ ಸಂಕಲನಕ್ಕೆ ಶ್ರೀ ಷ|| ಬ್ರ|| ಗಂಗಾಧರ ರಾಜಯೋಗೀಂದ್ರ ಶಿವಾಚಾರ್ಯ ಸ್ವಾಮೀಜಿ ಕಂಬಾಳಿಮಠ, ಬಳ್ಳಾರಿ ಇವರು ತಮ್ಮ ಕವಿತೆ ನೀಡಿ ಹರಸಿದ್ದಾರೆ.

ಜಿ. ಬಿ. ಆರ್. ಕಾಲೇಜಿನ ಕನ್ನಡ ರೀಡರ್ ಮಾನ್ಯ ಶ್ರೀ ಕರಣಂ. ವಿರೂಪಾಕ್ಷಗೌಡರು (ನವಲಿ) ಹೂವಿನಹಡಗಲಿ ಇವರ ಮುನ್ನುಡಿ ನಮ್ಮ ಸಂಕಲನಕ್ಕೊಂದು ಶೋಭೆ ಅವರಿಗೆ ನಮ್ಮ ಅನಂತ ಕೃತಜ್ಞತೆಗಳು.

ಸಾಹಿತ್ಯದ ಹಿತೈಷಿಗಳಾದ ಹೂವಿನಹಡಗಲಿ ಅಭಿಮಾನಿಗಳಿಗೆ. ಸಾಂಸ್ಕೃ-ತಿಕ ಕಾರ್ಯಕ್ರಮಗಳಿಗೆ ಹಾಗೂ ಸಾಹಿತ್ಯದ ಬಗೆಗೆ ಹೆಚ್ಚಿನ ಆಸಕ್ತಿ ಇರುವ ಜಿ. ಬಿ. ಆರ್. ಕಾಲೇಜಿನ ಪ್ರಾಂಶುಪಾಲರು ಆದ ಮಾನ್ಯ ಶ್ರೀ ಎಸ್. ಎಂ.

ಸಂಗನಬಸಯ್ಯ ಹಾಗೂ ಉಳಿದ ಕಾಲೇಜಿನ ಪ್ರಾಧ್ಯಾಪಕ ವೃಂದಕ್ಕೆ ಆಡಳಿತ ವೃಂದಕ್ಕೆ ಹಾಗೂ ವಿದ್ಯಾರ್ಥಿ-ವಿದ್ಯಾರ್ಥಿನಿ ವೃಂದಕ್ಕೆ ನಮ್ಮ ಅನಂತ ನಮನಗಳು. ಸಂಕಲನದ ಮುಖಪುಟ ವಿನ್ಯಾಸಕಾರರಾದ ಕಲಾವಿದ ಶ್ರೀ ಎಂ. ಪದ್ಮನಾಭ ಇವರಿಗೆ ನಮ್ಮ ನೆನಕೆಗಳು ಮತ್ತು ಈ ನಮ್ಮ ಸಂಕಲನದ ಮುದ್ರಣ ಕಾರ್ಯವನ್ನು ಮುತುವರ್ಜಿವಹಿಸಿ ಮುದ್ರಿಸಿದ ಮುದ್ರಣ ಮಾಲಕ ಮುಗುಳ್ನಗೆ ಚಂದ್ರು ಮತ್ತು ಮುದ್ರಣ ಕೆಲಸಗಾರರಾದ ಮಲ್ಲಾಡದ ಹಾಲಪ್ಪ ಮತ್ತು ರಾಮಣ್ಣ ದುರುಗಪ್ಪ ಗೊರವರ ಸಾ|| ಹಿರೇಮಲ್ಲನಕೆರೆ. ರಮೇಶ್. ನಾ. ಬಿಜಾಪೂರ. ಮತ್ತು ಬಸವರಾಜ ಕಿ. ಶಿರಹಟ್ಟಿ ಹಾಗೂ ಮೊದಲಾದವರಿಗೆ ನಾವು ಅಭಾರಿಗಳು. ಟೀಕೆ ಟಿಪ್ಪಣಿಗೆ ಸದಾ ಸ್ವಾಗತ

-ಸ. **ಪ್ರಭಾಕರ,** ಕೊಯಿಲಾರಗಟ್ಟಿ.
ಕಾರ್ಯದರ್ಶಿ,
ಹೂವಿನಹಡಗಲಿ-583219

# ಮುನ್ನುಡಿ

ಹೂವಿನಹಡಗಲಿಯ **'ಸ್ವರಚಿತ ಕವನ ನಿವೇದನಾ ಬಳಗ'** ದವರು ಹೊರತರುತ್ತಿರುವ **"ನಮ್ಮ ಕಾವ್ಯ-1990"** ವಿವಿಧ ವೃತ್ತಿ-ಪ್ರವೃತ್ತಿಯ ಬಿಸಿರಕ್ತದ ಕವಿಗಳ ಪ್ರಾತಿನಿಧಿಕ ಕವನ ಸಂಗ್ರಹವಾಗಿದೆ. ಹೀಗಾಗಿ ವಸ್ತು -ನಿರೂಪಣೆಗಳಲ್ಲಿ ವೈವಿಧ್ಯತೆ ಕಂಡುಬರುತ್ತಿರುವುದು ಸಹಜವೆನಿಸಿದೆ. ಹಿಂದು -ಳಿದ ಪ್ರದೇಶವಾದ ಈ ತಾಲೂಕಿನಲ್ಲಿ ಈಗಾಗಲೆ ನಾಲ್ಕಾರು!ಕೃತಿಗಳು ಬೆಳಕು ಕಂಡಿರುವುದು ಸಾಹಿತ್ಯಾಸಕ್ತರಿಗೆ ಅಭಿಮಾನದ ಹಾಗೂ ಸಂತೋಷದ ವಿಷಯ ವೆನಿಸಿದೆ. " **ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣಿತಮತಿ** " ಗಳಾಗಿರುವ ಇಲ್ಲಿಯ ಕವಿಗಳು ಉಕ್ತಿ ವೈಚಿತ್ರ್ಯದಲ್ಲಿ, ಭಾವ ಬಂಧುರತೆಯಲ್ಲಿ ತಮ್ಮದೇ ಆದ ಗತ್ತುಗಾರಿಕೆಯನ್ನು ಎತ್ತಿ ತೋರಿಸಿದ್ದಾರೆ. ಸುತ್ತ ಮುತ್ತಲಿನ ಪ್ರತಿಯೊಂದನ್ನು **'ಬೇಕು' 'ಬೇಡ'** ಗಳ ದೃಷ್ಟಿಕೋನದಿಂದ ಅಳೆಯುವ ಹವ್ಯಾಸ ಇಲ್ಲಿ ಅತ್ಯಂತ ತೀವ್ರವಾಗಿ ಕಂಡುಬರುತ್ತದೆ. ಬದುಕಿನ ಕುರಿತು ಪ್ರಮಾಣಿಕ ಜಿಜ್ಞಾಸೆಗೆ ಹೆಚ್ಚಿನ ಓತ್ತುಕೊಡಲಾಗಿಲ್ಲ. ಇಪ್ಪತ್ತನೆಯ ಶತ ಮಾನದ ಎಲ್ಲ ಧೂರ್ತತನಗಳನ್ನು ಮೈಗೂಡಿಸಿಕೊಂಡು ಬಾಳುತ್ತಿರುವ ನಾವು ವಾಸ್ತವಿಕತೆಯ ಪದರು ಪದರುಗಳನ್ನು ಬಿಚ್ಚಿ ಮೂಲ ಸತ್ಯದ ಶೋಧನೆ ಮಾಡಿಕೊಳ್ಳುವುದು ಅನಿವಾರ್ಯವಾಗಿದೆ. ಆದ್ದರಿಂದ ಲೇಖನಿಹಿಡಿಯುವವರು ಮಾನಸಿಕ ಜಗತ್ತಿನಲ್ಲಿ ಕವಿದಿರುವ ಭ್ರಮೆಯ ಮಂಜನ್ನು ಹರಿಸಿಕೊಂಡು ಅಂತರಂಗದ ಅಂಧಕಾರವನ್ನು ಹೋಗಲಾಡಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನ ಮಾಡಬೇಕಾಗಿದೆ. ಬರಿ ಸಾಮಾಜಿಕ ಕಳಕಳಿಯೊಂದೇ ಸಾಲದು ತೀವ್ರ ಶ್ರದ್ಧೆ ಸೂಕ್ಷ್ಮಮತಿ ಬೇಕಾಗುತ್ತದೆ.

ಶೋಷಣೆ, ಶೋಷಕರ ವಿರುದ್ಧ ಪ್ರತಿಭಟನೆಯನ್ನು ಸ್ವಲ್ಪ ಖಾರ -ವಾಗಿಯೇ **"ಕೂಲಿಗಳು ನಾವು"** ಮತ್ತು **'ನಾನು ಬರೆಯುತ್ತೇನೆ"** ಕವನಗಳಲ್ಲಿ ಕಾಣಬಹುದಾಗಿದೆ. ರಾಜಕೀಯ ಭ್ರಷ್ಟತೆಯನ್ನ ಮತ್ತು ಪ್ರಜಾ ಪ್ರಭುತ್ವದ ಕರಾಳ ಸ್ವರೂಪವನ್ನ **"ವಿನಂತಿ"** ಹಾಗೂ **"ಹೀಗಾಗಲೇಬೇಕು"** ಕವನಗಳು ಧ್ವನಿ ಪೂರ್ಣವಾಗಿ ಚಿತ್ರಿಸಿವೆ. ಹುಟ್ಟು-ಸಾವು ಬದುಕಿನ ಎರಡು ಮುಖಗಳು. ಜಿಜ್ಞಾಸೆ **"ಚಿಂತಿಸುವುದಿಲ್ಲ"**ಕವನದಲ್ಲಿ ಮೂಡಿದೆ. ಯಾವ

ಗೊತ್ತು ಗುರಿಯಿಲ್ಲದೆ ಸಾಗುತ್ತಿರುವ ಮಕ್ಕಳಿಗೆ ಪುಸ್ತಕದ ಹೊರೆ, ಪಾಲಕರಿಗೆ ಸಾಲದ ಹೊರೆಯಾಗಿರುವ ಇಂದಿನ ಶಿಕ್ಷಣ ಕ್ರಮವನ್ನು **'ಹರಕೆಯ ಕುರಿ'** ಎನ್ನುವ ಕವನ ತುಂಬ ಸಾರ್ಥಕವಾಗಿ ಪ್ರತಿಬಿಂಬಿಸಿದೆ. ಹೆಣ್ಣಿನ ಕಣ್ಣಹನಿ, ದುಡಿವವರ ಬೆವರ ಹನಿ–ಕವಿತೆಯಾಗಿ ಹರಿದಿರುವುದನ್ನು **"ನೊಂದವರಿಗಾಗಿ"** ಕವನ ಹೆಚ್ಚು ಅರ್ಥಪೂರ್ಣವಾಗಿ ಮೂಡಿಸಿದೆ. ಅನುಕರಣೆ, ವಾಚ್ಯವಾಗಿ ಬರೆಯುವುದು ಆರಂಭಿಕ ಕವಿಗಳಲ್ಲಿ ಕಾಣುವ ಸಾಮಾನ್ಯ ಲಕ್ಷಣ. ಇಲ್ಲಿ ಬಂದಿರುವ **'ನನ್ನವಳು'** ಎಂಬ ಕವಿತೆ ಬಿ. ಎಂ. ಶ್ರೀಯವರ ಇಂಗ್ಲೀಷ್ ಗೀತೆಯ ಧಾಟಿಯನ್ನು ಅನುಕರಿಸಿದೆ. **"ಮಾಸ್ತರ"** ಎಂಬುದು ಹೆಚ್ಚು ವಾಚ್ಯವಾಗಿ ನೀರಸವಾಗಿದೆ. ಗಂಡು ಹೆಣ್ಣಿನ ಪ್ರೇಮದ ವಿವಿಧ ವರಸೆಗಳನ್ನು **'ನನ್ನವಳು' "ಪ್ರೀತಿಯ ಕನಸಿನಲ್ಲಿ" "ಆ [ಈ] ಕ್ಷಣ" "ಯಾಕ" "ಪ್ರಶ್ನೆ"** ಮುಂತಾದ ಕವಿತೆಗಳಲ್ಲಿ ಕಾಣಬಹುದು ಕವಿ–ಪ್ರಣಯಿ–ಹುಚ್ಚ ಒಂದೇ ದೋಣಿಯ ನಾವಿಕರೆಂದು ಮಹಾಕವಿ ಷೇಕ್ಸಪಿಯರ್ ಹೇಳುವಂತೆ ಇಲ್ಲಿಯ ಪ್ರೇಮಿಗಳು ಪ್ರೀತಿಸಾಗರದಲ್ಲಿ ಹುಚ್ಚು ಅಲೆಗಳನ್ನಬ್ಬಿಸಿದ್ದಾರೆ. ಬೆಂಗಳೂರಿಗೆ ಹೆಚ್ಚು ಓಡಾಡಿದ ತರುಣ ಕವಿಯೊಬ್ಬರಿಗೆ ರಾಜಧಾನಿ ಬೆಂಗ್ಳೂರು ವಿಚಿತ್ರವಾಗಿ ಕಂಡಿರುವುದು **"ವಾಸ್ತವ"** ಕವನದಲ್ಲಿ ಮೂಡಿ ಬಂದಿದೆ. ಕಾವ್ಯಾ–ಲಾಪವನ್ನು ನಿಲ್ಲಿಸಬೇಕೆಂದು ನಮ್ಮ ಹಿಂದಿನ ಲಾಕ್ಷಣಿಕರು ಸೂಚಿಸಿದ್ದರು. **'ಕವನಗಳ ಕುಟ್ಟುತ್ತ ಕೂಡ್ರಬೇಡ'** ಎಂಬ ಎಚ್ಚರಿಕೆಯ ಕರೆ **'ಕಟ್ಟಿದು–ಕಣ್ಣಿಡು'** ಕವನದಲ್ಲಿ ಮೊಳಗಿದೆ. ಕವನ ರಚನೆಗಿಂತ ಜೀವನ ವಿವೇಚನೆ ಮಹತ್ವವಾದದ್ದು ಎಂಬುದನ್ನು ಆ ಕವಿ ತೋರಿಸಿಕೊಟ್ಟಿದ್ದಾನೆ. **'ಸ್ಥಿತಪ್ರಜ್ಞ' 'ಸ್ಫೋಟ'** ಕವನಗಳು ಹೆಚ್ಚು ಸಾಂಕೇತಿಕವಾಗಿದೆ.

**'ರಸಾವೇಶ' 'ಮರಹು' 'ಆಲಸ್ಯ' – ''ನಮ್ಮ ಕಾವ್ಯ''** ದ ಕವಿಗಳನ್ನು ಕಾಡದೇ ಬಿಟ್ಟಿಲ್ಲ **"ನಡೆವರೆಡಹದಿ ಕುಳಿತರೆಡಹುವರೇ ?"** ಎಂಬ ಸಮಾಧಾನ ನಮ್ಮಲ್ಲಿ. ಕವಿ ರಾಘವಾಂಕ ಹೇಳುವಂತೆ **"ಎಡವಾಯ್ದು–ಬಂದ ತಪ್ಪಂ ಸಾಧಿಸಿದೆ, ಕಡೆತನಕ ಬಂದ ಲೇಸಿಂಗೆ ತಲೆದೂಗ"** ಬೇಕಾಗಿದೆ. ಒಟ್ಟನಲ್ಲಿ ಇದೊಂದು ತರುಣ ಕವಿಗಳ ಸಾರ್ಥಕ ಪ್ರಯತ್ನವಾಗಿದೆ ಇಲ್ಲಿಯ ಕೆಲವು ಕವನಗಳು **'ಹಸಿಬಿಸಿ'** ಯೆನಿಸಿದರೆ ಮತ್ತೆ ಕೆಲವು ಪರಿಪಕ್ವ

ಗೊಂಡಿವೆ. ಕೆಲವು ವಾಚ್ಯವಾಗಿದ್ದರೆ ಮತ್ತೆ ಕೆಲವು ಧ್ವನಿಪೂರ್ಣವಾಗಿವೆ. ಭಾಷೆ-ಭಾವನೆಗಳ ಮೇಲೆ ಕೆಲವು ಕಡೆ ಹಿಡಿತ ತಪ್ಪಿದರೆ ಮತ್ತೆ ಕೆಲವು ಅರ್ಥ ಗರ್ಭಿತವಾಗಿವೆ. ಈ ಎಲ್ಲ ವೈಪರಿತ್ಯಗಳ ನಡುವೆಯೂ ಯಾವುದೋ ಆಶಾ. ಕಿರಣವನ್ನು ಮೂಡಿಸುವ ತವಕದಿಂದಾಗಿ ಕವನ ಸಂಕಲನ ಅಪರೂಪದ ಕೊಡುಗೆ ಯೆಂದೇ ಭಾವಿಸಬಹುದಾಗಿದೆ. ನಮ್ಮ ತರುಣ ಕವಿಗಳ ಕಾವ್ಯಕೃಷಿ ಇನ್ನಷ್ಟು ಹೆಚ್ಚಿ, ಈ ಬಂಜೆ ನೆಲದಲ್ಲಿ ಹೆಚ್ಚು ಹೆಚ್ಚು '**ಮೊಗ್ಗು**' ಗಳು '**ಅರಳು**' ವಂತಾಗಲಿ ಎಂದು ಹಾರೈಸೋಣ.

**ಕೆ. ವಿರೂಪಾಕ್ಷಗೌಡ,**
ಕನ್ನಡ ರೀಡರ್
ಜಿ. ಬಿ. ಆರ್. ಕಾಲೇಜ್ ಹಡಗಲಿ.

20-8-90

# ಪರಿವಿಡಿ


| | | | ಪುಟ |
|---|---|---|---|
| ೧. | ಶಿಲ್ಪಿ ನೀನು | ಶ್ರೀ ಗಂಗಾಧರ ಸ್ವಾಮಿಜೀ | ೧ |
| ೨. | ಕೂಲಿಗಳು ನಾವು | ವಾಸುದೇವ ನಾಡಿಗ್ | ೨ |
| ೩. | ಕುಹಕಿಗಳಿಗೆ | ಎಂ. ಎಲ್. ಚಂದ್ರಿಕಾ | ೩ |
| ೪. | ವಿನಂತಿ | ಕೆ. ರುದ್ರಪ್ಪ | ೪ |
| ೫. | ಚಿಂತಿಸುವುದಿಲ್ಲ | ವಿ. ಅರುಣಕುಮಾರ್ | ೬ |
| ೬. | ಆ ದಿನಗಳ ಬರೆಯಬಲ್ಲೆ | ಚಂದ್ರಶೇಖರ ಬೆನ್ನೂರ್ | ೭ |
| ೭. | ಹೀಗಾಗಲೇಬೇಕು | ಶೇಷಗಿರಿರಾವ್ | ೮ |
| ೮. | ಹರಕೆಯ ಕುರಿ | ಎನ್. ಎಂ. ಕೊಟ್ರೇಶ್ | ೧೦ |
| ೯. | ಐನಹಳ್ಳಿ ಬೋಳಗುಡ್ಡ | ಪಿ. ಆರ್. ವೆಂಕಟೇಶ್ | ೧೨ |
| ೧೦. | ನಾನು ಬರೆಯುತ್ತೇನೆ | ಬಿ. ಪೀರ್‌ಭಾಷ | ೧೪ |
| ೧೧. | ಸ್ಫೋಟ | ಶಾಂತಮೂರ್ತಿ ಕುಲಕರ್ಣಿ | ೧೭ |
| ೧೨. | ಪ್ರೀತಿಯ ಕನಸೆಲ್ಲಾ | ಬಿ. ಕಲ್ಯಾಣಕುಮಾರ್ | ೧೮ |
| ೧೩. | ಆ (ಈ) ಕ್ಷಣ | ಸದ್ಯೋಜಾತ | ೧೯ |
| ೧೪. | ಯಾಕ | ಪ್ರಕಾಶ ಮಲ್ಕಿಒಡೆಯರ್ | ೨೦ |
| ೧೫. | ಪ್ರಶ್ನೆ | ಪಾರ್ವತಿಸುತ | ೨೧ |
| ೧೬. | ಅಮ್ಮಾ | ಎಲ್. ಖಾದರ್‌ಭಾಷ | ೨೨ |
| ೧೭. | ಅಂತರ್ಮುಖಿ | ಚಿ. ಸುರೇಂದ್ರ | ೨೩ |
| ೧೮. | ನನ್ನವಳು | ಎಂ. ಡುಂಗರ್ ಚಂದ್ | ೨೪ |
| ೧೯. | ಮಾಸ್ತರ | ಕೆಂ. CH | ೨೫ |
| ೨೦. | ವಾಸ್ತವ | ಕೆ. ದಯಾನಂದಗೌಡ | ೨೭ |
| ೨೧. | ಸ್ಥಿತಪ್ರಜ್ಞ | ಟಿ. ವಿರುಪಾಕ್ಷಪ್ಪ | ೨೯ |
| ೨೨. | ನೊಂದವರಿಗಾಗಿ | ಸ. ಪ್ರಭಾಕರ | ೩೧ |
| ೨೩. | ಕಟ್ಟೆಡು ಕಣ್ಣಿಡು | ಜೆ. ಪದ್ಮರಾಜ | ೩೨ |

## ಶಿಲ್ಪಿ ನೀನು

ಶಿಲೆಯು ನಾನು
ಶಿಲ್ಪಿ ನೀನು
ಮೂರ್ತಿ ಮನದ ಚೇತನ
ನಿನ್ನ ದೃಷ್ಟಿ ಸೃಷ್ಟಿಯಲಿ
ಜಗವೇ ಶಿವದೇಗುಲ
ನಿನ್ನ ಕರುಣೆ ಕಿರುಣಗಳು
ಜನತೆ ಮನವ ಬೆಳಗಲಿ
ಒಲವ ಜೇನ ಸವಿಯ ಹೀರಿ
ಮನು ಕುಲವು ನಲಿಯಲಿ
ನಿನ್ನ ಪಾದ ತುಳತದಲ್ಲಿ
ಸಕಲ ಪಾಪ ಕರಗಲಿ
ಜನರ ಭಕ್ತಿ ಶಿವನ ಭಕ್ತಿ
ಬೆರೆತು ಉಕ್ಕಿ ಹರಿಯಲಿ
ನೆಲೆಯು ಸಿಗದೆ
ಅಲಿಯುತಿರುವ
ಭವದ ಬಲೆಯ ಒಳಗೆ ಬಂಧಿ
ಕರುಣೆಯಿರಲಿ ಕಂಬಾಳೇಶ
ನಿನ್ನ ನನೆವ ನನ್ನಲಿ

**ಶ್ರೀ ಷ॥ ಬ್ರ॥ ಗಂಗಾಧರ**
**ರಾಜಯೋಗೀಂದ್ರ ಶಿವಾಚಾರ್ಯ**
**ಸ್ವಾಮೀಜಿ**

## ಕೂಲಿಗಳು ನಾವು

ಸಿಮೆಂಟಿನೊಂದಿಗೇ
ಗಡಸಾಗುವ ನಾವು
ದಿನಗೂಲಿಗಳು
ಹೆಜ್ಜೆಯೂರಿದಾಗಲೊಮ್ಮೆ ಚಟ್ಟನೆ
ರಕ್ತ ಚಿಮ್ಮುವುದು ಕಾಲು ಸೀಳಿನೊಂದಿಗೆ
ಕಲ್ಲುಕಾಂಕ್ರೀಟ್‌ಉಸುಕೂ ತೋಯುತ್ತವೆ
ಏಕೆಂದರೆ ನಾವು ದಿನಗೂಲಿಗಳು

ಹರಿದಸೀರೆಯಾಚೆ ಬಾಡಿದೆದೆ
ಹೊಟ್ಟೆಗಂಟಿದ ಬೆನ್ನಿನ ಜಿಡ್ಡು
ದವಡೆಗೆ ಮೆತ್ತಿಕೊಂಡ ಗಲ್ಲ
ಕಪ್ಪುಕನಸುಗಳ ಹೊರುವ ಅಸ್ಥಿ
ನವರ್ಗಾಸ್ತಿ !
ಏಕೆಂದರೆ ನಾವು ದಿನಗೂಲಿಗಳು

ನಾವು ಬುನಾದಿ ಹಾಕಿದ ಮಹಲು
ಮುಗುಳ್ನಗುತ್ತವೆ
ಗೇಟು ಕಾಯುವ ನಾಯಿ
ಗುರ್‌ರ್........ಎನ್ನುತ್ತದೆ
ಸೂರ್ಯನಡಿ ನಿತ್ಯ ನಾವು ದಾಟುವಾಗ
ಏಕೆಂದರೆ ನಾವು ದಿನಗೂಲಿಗಳು

ತುತ್ತು ಕೂಳಿಗೆ ಬದುಕ
ಬಿಸಿಲಿಗೊಡ್ಡಿ ಬಸವಳಿದು
ದಿನದಿನದ ಜೀವನಕೆ ಅನುಭವಗಳ ಬಾಚುವ
ದಿನಗೂಲಿಗಳು ನಾವು
ಬದುಕುಗಳ ಕಟ್ಟುವ ನಿತ್ಯದ
ಕೂಲಿಗಳು.

**–ವಾಸುದೇವ ನಾಡಿಗ**

## ಕುಹಕಿಗಳಿಗೆ

ನಾ ಅಂದು ಬರೆದದ್ದೆ ಕದ್ದು
ಅದೇ ಚೆಂದಿಯಾದ ಕನಸುಗಳು
ನೀ ಎಂದು ಹೇಳಿದೆಯೋ
ಇಂದೇ ಬರೆದೆ ಹೊಸ ಕಾವ್ಯ

ನಾ ಬರೆದು ಉರುಳಿದೆ
ನಾಲ್ಕು ವರುಷಗಳು
ರಾಮಾಯಣದಲಿ ಸೀತೆಗೆ
ಮಹಾಭಾರತದಲಿ ದ್ರೌಪದಿಗೆ
ಕಲಿಯುಗದಲಿ ಜನರಿಗೆ ಬಂದಂತೆ
ನಿರೀಕ್ಷಿಸಿದ್ದೆ ಈ ಕಾವ್ಯಕ್ಕೂ
ಬರುವುದೆಂದು ಕುಹಕಿತನ.

ಕಳಬೇಕಾಗಿಲ್ಲ ಕಲೆಯನ್ನ
ಕಲೆಯೇ ಈ ಮದಿಗೆ ಬಂದಿದೆ
ದೈವದತ್ತ
ತಂದೆಯೋ "ಸಾಹಿತ್ಯ ರತ್ನ"
ಪ್ರಶಸ್ತಿ ವಿಜೇತ.

ಕೇಳಿ, ಕಳಬೇಕಿಲ್ಲ ಕಲೆಯನ್ನ
ನಾ ಬಲ್ಲೆ ಕದ್ದವರ ದೊಡ್ಡತನ
ಆದರೂ....
ಕಾಣದಂತೆ ನಾನಿದ್ದೆ ಇಷ್ಟುದಿನ
ಯಾಕೆ? ತುಳುಕೀತು ತುಂಬಿದ ಕೊಡ !

–ಎಂ ಎಲ್. ಚಂದ್ರಿಕಾ

# ವಿನಂತಿ

ಸಾವಿರ ಪ್ರಶ್ನೆಗಳಿವೆ
ಮಾತನಾಡಿ ಪರಿಹರಿಸಬೇಕಿದೆ
ಆದೆಯಾ ?
ನಿನ್ನ ಅಸ್ತಿತ್ವದ ಬಗೆಗೆ
ಸನಾತನ ಮನ ಪರಿತಪಿಸುತಿದೆ
ನೂರು ಹೊತ್ತು ನೋವಿದೆ
ತ್ಯಾಗ ಚಿರಮೌಲ್ಯವಾಗಿದೆ
ನಿನ್ನ ನಿಲುವು ಭಾರತ ರಣಕ್ಕೆ ನಾಂದಿಯಾಗಿದೆ
ಅನ್ನ—ನೀರು—ನೆಲ
ಖಲಿಸ್ತಾನ–ಕಾಶ್ಮೀರ–ನೆಕ್ಸಲೈಟ್–ಜಾಪ್ನಾ
– – – ಇನ್ನೂ – – –

ತಿಕ್ಕಾಟದಲ್ಲಿ ಜೀವ ನೋಯುತಿದೆ
ನೊಂದ ಬದುಕಿಗೆ ಸಂಜೀವಿನಿಯಾಗು
ಆಗೆಯಾ ?
ಮನದ ಬಿರುಕ ಬೆಸೆಯದಿರೆ
ಮಾನವತೆ ಕನಸು ಗೋರಿಯಾಗುವುದು ದಿಟ

— — — — — —

ದಿನವೂ ಮರಣ ವಾರ್ತೆ
ನಿನ್ನ ತಣಿಸಲೆಳಿಸಿದ ಫಲ
ದಿನ ದಿನದ ಸಿಹಿ,ಭಾವ ಹಳಸದೆ ಹದುಳವಿದೆ
ತಣಿಯಲಾರೆಯಾ ?
ಮೌನ ಮುರಿದು, ಮುನಿಸ ತಡೆದು
ಕಾಲ ದೇಶದಾಚೆ ಇರುವ ನೀ ಕೇಳಿಸಿಕೋ

ಕಾಯಗಳ ಕಾಯಕಲ್ಪ ಆಗಬೇಕಿದೆ
ನಿನ್ನ ದರುಶನದ ಸೆರಗ ಚಾಡಬೇಕಿದೆ
ದೇವತೆ! ಪ್ರಸನ್ನಳಾಗು, ಹಸನುಗೊಳಿಸು.
ಕಾಡ ಕಿಚ್ಚಿಗೆ ತಳ್ಳದಿರು.
ಮರೆಯದಿರು ;
ನಿನಗೂ ನಿನ್ನವರಿಗೂ ಸಂಬಂಧವಿದೆ.

—**ಕೆ ರುದ್ರಪ್ಪ**

## ಚಿಂತಿಸುವುದಿಲ್ಲ

ಹುಟ್ಟು ಅನಪೇಕ್ಷಿತ
ಗಂಡು-ಹೆಣ್ಣಿನ ಮಿಲನಕ್ಕೆ
ಪ್ರಕೃತಿ ನೀಡಿದ
ಅನಿವಾರ್ಯ ಅನಪೇಕ್ಷಿತ ಫಲ
ಹುಟ್ಟಿನಂತೆ ಸಾವು
ಅನಪೇಕ್ಷಿತವಲ್ಲ
ಸಮಾಜದಿಂದ
ಅದು ಅಪೇಕ್ಷಿತ
ಬದುಕಿನಲ್ಲಿ ರಾಜಿ ಪ್ರತಿಯೊಂದಕ್ಕೂ ಮನೋಭಾವದಿಂದ
ಸಿದ್ಧಾಂತ, ಚಿಂತನ ವ್ಯಕ್ತಿತ್ವ
ಕೊಂದುಕೊಳ್ಳಬೇಕು
ಇಲ್ಲದಿದ್ದರೆ ಸಮಾಜ ಅದನ್ನು ಕೊಲ್ಲುತ್ತದೆ.
ಸಿದ್ಧಾಂತ, ಚಿಂತನ, ವ್ಯಕ್ತಿತ್ವದ
ಸಾವನ್ನು ನೋಡಲಾರೆ
ಬದಲು ಭೌತಿಕ ಸಾವನ್ನಾದರೂ
ಪಡೆಯಬೇಕೆನಿಸುತ್ತದೆ
ಇದು ಅನಿವಾರ್ಯ.
ಸಾವನ್ನು ಕಂಡ ಜನ
ಪಲಾಯನವಾದವೆನ್ನಲಿ
ಹೇಡಿತನವೆನ್ನಲಿ
ನಾನು ಚಿಂತಿಸುವದಿಲ್ಲ.

ವ. ಅರುಣಕುಮಾರ್

# ಆ ದಿನಗಳ ಬರೆಯುಬಲ್ಲೆ

ಆ ದಿನಗಳ ಬರೆಯುಬಲ್ಲೆ
ಕುರುಡನಾಗಿ ಕಿವುಡನಾಗಿ
ಅನ್ಯಾಯವ ಅನ್ಯಾಯವೆಂದು
ಹೇಳುವ ಎದೆಗಾರಿಕೆ
ಇದ್ದಿಲ್ಲದ ದಿನಗಳ ಬರೆಯುಬಲ್ಲೆ
ವ್ಯವಸ್ಥೆಯ ಸರ್ಕಸ್ಸಿನೊಳಗೆ
ಚಾರ್ಲಿಯಾಗಿ ಚಪ್ಪಾಳೆಗಿಟ್ಟಿಸಿದ
ವಿಷಾದ ದಿನಗಳ ಬರೆಯುಬಲ್ಲೆ

ಅನ್ನಕ್ಕಿಂತ ಸ್ವಾತಂತ್ರ್ಯ
ಮುಖ್ಯವೆಂದು ನುಡಿದ
ಅತಿವಿಷಾದದ ದಿನಗಳ ಬರೆಯುಬಲ್ಲೆ

ಸಾವಿನ ಭಯದ ಅಳುಕಿದ್ದರೂ
ಅರಳುವ ಚಂಗುಲಾಬಿಯ
ಬಯಕೆಯ ಬೇರುಗಳು
ಮತ್ತೆ ಚಿಗುರುವ ಆಶಾದಿನಗಳ ಬರೆಯುಬಲ್ಲೆ

ಕಪ್ಪುಗವಿದ ಮನಸ್ಸಿನೊಳಗೆ
ಹೊತ ಗೋರಿಗಳ ಗರ್ಭದಿಂದ
ನನ್ನ ಕನಸುಗಳ ತೊಳೆದು ಬೆಳಗಿಸುವ
ಸಂತಸದ ದಿನಗಳ ಬರೆಯುಬಲ್ಲೆ

**-ಚಂದ್ರಶೇಖರ ಬೆನ್ನೂರ**

# ಹೀಗಾಗಲೇಬೇಕು

ಇಲ್ಲಿ
ಹೀಗಾಗುತ್ತದೆ
ಪ್ರಶಾಂತತೆಯ ಬದಲು
ಅಶಾಂತತೆ
ವಸ್ತ್ರವಸತಿಗಳ ಬದಲು
ಶಸ್ತ್ರಾಸ್ತ್ರ ಸಂಗ್ರಹತೆ
ಹೆಚ್ಚಿ
ಕ್ಷಣ-ಕ್ಷಣಗಳನ್ನು ಭಯ ಆವರಿಸಿ
ಬದುಕೇ ಬಾಡುತ್ತದೆ
ಮೊದಲ ಹಸಿವನ್ನ
ಭವಿಷ್ಯದ ಕಾತರದ ದಿನಗಳನ್ನು
ಹರಿವ ನದಿ-ಹಾರುವ ಹಕ್ಕಿ
ಮುದ್ದುಮಗುವಿನ ತುಂಟನಗೆ
ಮತ್ತೆಲ್ಲ
ಬದುಕ ಸುಂದರತೆಯನ್ನ
ರೊಟ್ಟಿಯ ತುಂಡನ್ನ ಅಣಕಿಸುತ್ತದೆ
ಬಂದೂಕದ ಗುಂಡು
ಕರುಣೆ ಕನಿಕರ ಮಾನವೀಯತೆಗಳ
ಬಲಿಗೊಟ್ಟು ಬಲಗೊಳ್ಳುತ್ತಾ !
ನಡೆದಿದೆ ಬಂಡವಾಳಿಗಳ
ಆಕಾಶ ಯುದ್ಧದ ತಂತ್ರ
ಭೂಮಿಯ ಮಾತಿರಲಿ
ಆಕಾಶಕೂ ಹಾರಿದೆ
ಮೇಲೇರಿದ ಕುತಂತ್ರ
ಆದರೆ

ಇದು ಹೀಗಾಗಲೇಬೇಕು
ಬಳ್ಳಿಯು ಹೂ ಅರಳಲೇಬೇಕು
ಹಕ್ಕಿ ಸುಂದರ ಕನಸುಗಳ ಹೆ ಣೆಯುತ್ತ
ಹಾರಲೇಬೇಕು
ಕಂದನಕೇಕೆ ನೂರ್ಮಡಿಸಿ
ಬಂದೂಕನಣಕಿಸಬೇಕು
ಎಲ್ಲಾ -ಇಲ್ಲಿರುವದೆಲ್ಲಾ
ನಿರಂತರವಾಗಬೇಕು
ಇದು ನಿರಂತರವಾಗಲೇಬೇಕು

**ಹೆಚ್. ಶೇಷಗಿರಿರಾವ್**

# ಹರಕೆಯ ಕುರಿ

ಶಾಲೆ ಹುಡುಕುತ್ತಿರುವೆಯಾ ಮಗು
ಮುರುಕು ಬಾಗಿಲು, ಹರುಕು ಛಾವಣಿ
ಉರಿ ಬಿಸಿಲು ಬಯಲು ಕಾಣುತ್ತಿಲ್ಲವೆ
ಅದೇ ನಿನ್ನ ಶಾಲೆ !
ಅಂಗಳದ ಉಸುಕಿನಲ್ಲಿ ಬೆರಳಚ್ಚಿ ಬರೆ.
'ಅ— ಅಗಸ, ಗ— ಗಣಪ
ಈತ ಈಶ, ಆತ ಬಡವ........ ಓದು
ನವೋದಯ ಶಾಲೆ, ಹೊಸ ಶಿಕ್ಷಣ ನೀತಿ
ಆಪರೇಷನ್ ಬ್ಲಾಕ ಬೋರ್ಡ್...........
ಜೊಲ್ಲು ಸುರಿಸಬೇಡ
ಅವು ದೂರದ ನುಣ್ಣನೆಯ ಬೆಟ್ಟಗಳು
ನೀನು ಗೆಲಿಲಿಯೊ, ಐನ್‌ಸ್ಟೀನ್,
ಟಾಲ್ ಸ್ಟಾಯ್, ಠಾಗೂರ್ ಆದರೆ
ಯಾರಿಗೇನು ಲಾಭ ?
ಸುಮ್ಮನೆ ಖುಷಿ ಪಾಠ ಓದು
'ಇದು ಬಡವರ ಚರಕ
ಅದು ಇತರರ ಚರಕ,' ಕಂಠ ಪಾಠ ಹಾಕು
ಇನ್ನು ಮೇಲೆ ನಿನಗೆ ಮೆಷ್ಟ್ರೇ ಬೇಡವಂತೆ
ಅಂಚೆ, ರೇಡಿಯೋ, ಟಿ. ವಿ. ಗಳೇ
ಪಾಠ ಹೇಳುತ್ತವೆ.
ತಲೆಯಲ್ಲಿ ಜಾಗವಿದ್ದರೆ ತುರಿಕಿಕೊ
ಉದ್ಯೋಗವನ್ನಂತೂ ಕೇಳಲೇ ಬೇಡ
ಕಾಂಪ್ಯೂಟರ್‌ಗಳು ಬಂದಿಲ್ಲವೆ !
ಹೆಗಲೆ ಮೇಲೆ ಪುಸ್ತಕದ ಭಾರ
ತಲೆಯ ಮೇಲೆ ಸಾಲದ ಭಾರ
ಹೊತ್ತು ತಯಾರಿ ನಡೆಸು ಇಪ್ಪತ್ತೊಂದನೆ

ಶತಮಾನಕ್ಕೆ
ಎಡ ಬಲಕ್ಕೆ ಪ್ರಗತಿಯ ಸಂಖ್ಯೆಗಳು
ಬಣ್ಣದ ಪತಾಕೆಗಳನ್ನು ಹಾರಿಸುತ್ತೇವೆ
ಕಣ್ಣುಗಳು ಮಂಪರು ಕವಿಯುವಂತೆ
ಕೋಟಿ, ಕೋಟಿ ಖರ್ಚಿನ ಯೋಜನೆ
ಪ್ರತಿ ವರ್ಷ ನಿನ್ನ ದಿನಾಚರಣೆ
ಹೇಗಿದೆ ಹಬ್ಬ, ದಿಬ್ಬಣ, ಅಬ್ಬರ
ಬೇಕಿದ್ದರೆ ನೀನೂ ಕಣಿ ಹಲಗೆ ಬಾರಿಸು
ಹೀಗೆ ಸಾಗು............ಸಾಗುತ್ತಲೇ ಹೋಗು
ಇಪ್ಪತ್ತೊಂದು,ಇಪ್ಪತ್ತೆರಡು ಇಪ್ಪತ್ತುನೂರು............
ಶತಮಾನಗಳು ಉರುಳುತ್ತಲೇ ಇರುತ್ತವೆ
ನಿನ್ನ ಅಸಂಖ್ಯ ಪ್ರಶ್ನೆಗಳು
ಅಖಾತದ ತಳದಲ್ಲಿ ಹೂತು ಹೋಗುತ್ತೇವೆ
ನಿನ್ನ ಎಳೆ ಕಣ್ಣುಗಳಿಗೆ ಅವರು ಹಾಕಿದ
ಕಪ್ಪು ಕನ್ನಡಕ ಕಣ್ಣಲ್ಲೇ ಉಳಿಯುತ್ತದೆ
ನೀನು ಐಸ್‌ಕ್ಯಾಂಡಿಯಾಗುತ್ತಿ
ಅವರು ಚೀಪುತ್ತಾರೆ
ಈ ಜಾತ್ರೆಯಲ್ಲಿ ನೀನೊಂದು ಹರಕೆಯ ಕುರಿ.

**ಎನ್. ಎಂ. ಕೊಟ್ರೇಶ್**

# ಐನಹಳ್ಳಿ ಬೋಳುಗುಡ್ಡ

ಅಯ್ಯನಹಳ್ಳಿ ಬೋಳುಗುಡ್ಡಕ್ಕೆ
ಮಿರಿ ಮಿರಿ ಮಿಂಚು,
ಎಷ್ಟೋ ಸಂಚುಗಳ ಹೊಳಪು–
ಆಗ–
ಕಾಡು ಹೊತ್ತ ಧೀರ
ತೆಕ್ಕೆಯಲ್ಲಿ ತೊಡುಕೆ ಹಾವುಗಳಾಟ,
ಹಲ್ಲು ಗಿಂಜಿದ ಹೂಗಳು
ಒಂದಕ್ಕೊಂದು ಜೋತ, ಆತ
ಮರಗಿಡ ಬಳ್ಳಿಗಳು,
ಆಕಾಶ ಗಂಗೆ–
ಮೈ ತುಂಬ ಉರುಳಿ
ಮೌನ ಸಂಧಿಗಳಲ್ಲಿ 'ಲವ್ ಸಾಂಗ್.'
ಹಕ್ಕಿ ಪುಕ್ಕ ಗರಿಕೆದರಿದ ಕೀರಿಟ
ಬೋಳು ತಲೆಯ ರಾಜನಿಗೆ.
ಚಂದಿರೆ ತೀಡುತ್ತಿದ್ದಳು
ನೆತ್ತಿಯ ತುಂಬ
ತಂಪಿನ ಬಿಸಿಯ ಬೆರಳುಗಳ
ಈಗುಳಿದದ್ದು
ತೋಳಗಳಗುದ್ದು, ಹೆಗ್ಗಣಗಳಕುಣಿ,
ಹಳ್ಳಿಯ ತೊಕ್ಕಿನ ತೋಪು,
ಆಗಾಗ ಇಳಿಸುತ್ತದೆ ನಾಗರಕಾಟ
ಮಂಗಗಳ ಆಟಕ್ಕೆ.
ಬೋಳುರಾಜನ ಕಣ್ಣಲ್ಲಿ
ಬರೀ ಆಶೆ ಮರುಗುತ್ತದೆ
ನೀ........ರಾಶೆಯಾಗಿ ಕರಗುತ್ತದೆ.

ಪಾಪ, ದುರಂತವನ್ನು ಹಂಚುತ್ತಾನೆ
ಮುದಿರಂಡೆಯ ಮರಗಳಿಗೆ
ನೆಲ ನೋಡುವ ತೊಗಟೆಗಳಿಗೆ
ಹೀಗೆ, ಆಯ್ಯನಹಳ್ಳಿ ಬೋಳುಗುಡ್ಡದ ನೆತ್ತಿಗೆ
ಸೂರ್ಯನ ಶಾಖ
ನೆರೆಯಲಾದ ನೆತ್ತಿ ಬಾಯ್ತೆರಿಯುತ್ತದೆ
ಹನಿಕರಿಸುವ ಮೋಡಗಳ ಮಾಳಿಗೆಗೆ,
ಮರಕಡಿವವನ ಕೊಡಲಿಯ ಮಿಂಚಿಗೋ
ಕಲ್ಲುಹೊಡೆಯುವವನ ಬಡಿತದ ಸಿಡಿಲಿಗೋ
ಕುರಿ ಕಾಯುವವನ ಸಿಳ್ಳಿನ ಗಾಳಿಗೋ
ಮಾಳಿಗೆ ಮುರಿದು, ಮಳಿ ಚದುರುತ್ತದೆ.

ಮತ್ತೆ ನೆಂಟಸ್ಥಿಕೆ
ಒಂಟಿತನದ ಮೇಲೆ,
ದುರಂತ ಸವಾರಿಯಗೌಡ
ಐನಹಳ್ಳಿಯ ಬೋಳುಗುಡ್ಡ,
ಕಾರು ಹಿಮ್ಮೆಟ್ಟುವ ಛಲದೆ
ನಾಯಿಯೊಡನೆ !

—ಪಿ. ಆರ್. ವೆಂಕಟೇಶ್,

# ನಾನು ಬರೆಯುತ್ತೇನೆ

ನಾನು ಬರೆಯುತ್ತೇನೆ
ಕಪ್ಪು ಇಂಕಿನಿಂದ
ಕೆಂಪು ಅಕ್ಷರ ಮೂಡಿಸುತ್ತೇನೆ
ನನ್ನ ಲೇಖನಿಯನ್ನು
ನನ್ನ ಸಂದೇಶದ
ಸಾಧನವನ್ನಾಗಿಸುತ್ತೇನೆ.
ನನ್ನ ಕವನಗಳಲಿ
ಶೋಷಕರೆದೆಗೆ ಒದೆಯುವ
ಶಬ್ದಗಳನ್ನು ಮೂಡಿಸುತ್ತೇನೆ
ಕೇಳಿ.
ಕೊಳೆಯುತ್ತಲೇ ಇರುವ
ಬಲಿತ ರಟ್ಟೆಗಳೇ
ಭವ್ಯ ಭಾರತದ
ನಿರುದ್ಯೋಗ ಸೈನಿಕರೆ
ನಿಮ್ಮ ರಟ್ಟೆಗಳು
ಗೊಬ್ಬರವಾಗುವ ಮುನ್ನ
ಪ್ರತಿಭಟನೆಯ ನಿಮ್ಮ ಮುಷ್ಠಿಗಳು
ಹೋರಾಟದ ಅಸ್ತ್ರಗಳಾಗಲಿ.
ಬೆವರ ಬಸೆ ಬಸೆದು ಬಡವಾಗಿ
ಭವ್ಯ ಬಂಗಲೆಗಳ ಅಡಿಯಲ್ಲಿ
ಬುನಾದಿಯ ಶಿಲೆಯಾದವರೆ
ಎದೆಯುಬ್ಬಿಸಿ ಎದ್ದು ನಿಂತು
ಜ್ವಾಲಾಮುಖಿಯಾಗಿ
ನಿಸ್ವಾರ್ಥತೆಯ ದುಡಿಮೆಗಾರರೇ
ನಿಮ್ಮ ಸಲಿಕೆ ಸುತ್ತಿಗೆಗಳು

ನೇಗಿಲು ಕುಡುಗೋಲುಗಳು
ಅವಶೇಷಗಳಾಗುವ ಮುನ್ನ
ಅವು
ಅಸಮಾನತೆಯ ಕಟ್ಟಡಕ್ಕೆ
ಗುದ್ದಿ ಗುದ್ದಿ ಕೆಡವಿ ಹಾಕಲಿ.
ಮೋಹಕರ ಮನಗಳಲ್ಲಿ
ರಂಜಕರ ಕವನಗಳಲ್ಲಿ
ನಿಮ್ಮ ಅಂಗ ಪುಷ್ಟತೆಯನ್ನೇ
ಕಥಾವಸ್ತುವಾಗಿ ಕೊಟ್ಟವರೇ
ಬೀಸಿ ನಿಮ್ಮ ಕೈಗಳನ್ನು.
ನಿಮ್ಮ ಬಳೆಗಳ ಸದ್ದು
ಹೋರಾಟದ ಕಹಳೆಯಾಗಲಿ.
ಪದವಿ ಆಸನಗಳಿಗೆ
ಜೋತು ಬಿದ್ದವರೆ
ಸುಲಿಗೆಗಾರನ ಮನೆಯ
ರಕ್ಷಕ ನಾಯಿಗಳಾದವರೆ
ಸುಲಿದು ಸಿಪ್ಪೆ ಮಾಡಿ
ಸುಪ್ಪತ್ತಿಗೆಯಲಿ ಮೆರೆಯುವ
ಸೂಟುಗಳೇ
ನಾನು ನಿಮಗಾಗಿಯೂ ಬರೆಯುತ್ತೇನೆ.
ಕೊನೆಗೊಮ್ಮೆ ನಿಮಗೆ ಹೇಳುತ್ತನೆ.
ನನ್ನ ಕವಿತೆಯ ಶಬ್ದಗಳು
ನಿಮ್ಮೆದೆಗೆ ಗುದ್ದಿದರೆ
ನಾನು ಸಾರ್ಥಕತೆಯ ನಿಟ್ಟುಸಿರಿಡುತ್ತೇನೆ
ನನಗೆ ನಂಬಿಕೆ ಇದೆ
ಶೋಷಿತ ಮನಗಳು
ಪ್ರವಾಹವಾಗಿ
ನಿಮ್ಮ ಶೋಷಣೆ ದಬ್ಬಾಳಿಕೆಗಳ

ಸಮಾಧಿಗೈಯುತ್ತವೆ.
ಆಗ
ನನ್ನಂತವರ ಲೇಖನಿಗಳು
ನೆಮ್ಮದಿಯ ನಿಟುಸಿರಿಡುತ್ತವೆ.
ಅಲ್ಲಿತನಕ
ಲೇಖನಿಗಳು ಖಡ್ಗಗಳಾಗುತ್ತಲೇ
ಇರುತ್ತವೆ.

**-ಬಿ. ಪೀರ್‌ಭಾಷ**

# ಸ್ಫೋಟ

ನೋಟಕ್ಕೆ ವಾಹ್ ! ಗಂಭೀರ
ಅಂತರ್ಮುಖಿಯಾಗಿಹ ಮನದಲ್ಲಿ
ತಹ, ತಹ, ಹೃದಯ ಕಡಾಯಿಯಲ್ಲಿ
ಭಾವನೆಗಳ ತೈಲ ತಳಮಳ,
ತುಟಿಯಲಿ ನಟನೆಯ ತಿಣುಕುನಗೆ,
ಶೂನ್ಯಾರ್ಥದ ವಿಚಾರೆ ಕುದಿಯುವ
ಲಾವರಸ. ನನ್ನ ಕಣ್ಣು ಹೊಳಪು
ಲಕ್ಷ ನಕ್ಷತ್ರಗಳ ಫಳುಕೆಂದಯಾ ?
ಅಲ್ಲ–ಪ್ರೇಮವಂಚಿತನಾದ ವಿರಹಿಯ
ದಹಿಸುವ ಆಕ್ರಾಂತ ನೋವುಗೆಂಪು
ಜ್ವಾಲಾಮುಖಿಯ ಸಿಡಿತದ
ಮುಂಚಿನ ಕರಾಳ ಶಾಂತತೆ. ಅಂತರ್–
ವಾಹಿನಿಯಾದ ನನ್ನ ಮರಣವೊ–
ನಿನ್ನ ಸಂತಸದ ದಹನವ್ರೋ ?
ನಾನರಿಯೆ.

–ಶಾಂತಮೂರ್ತಿ ಕುಲಕರ್ಣಿ,

# ಪ್ರೀತಿಯು ಕನಸೆಲ್ಲಾ....

ಪ್ರೀತಿಯು ಕನಸೆಲ್ಲಾ
ಕರಗಿ ಹೊಯಿತೆ ಕೊನೆಗೂ
ಮೂಕವಾಯಿತೆ ಭಾವಾ
ಸೋತು ಹೋಯಿತೆ ಜೀವಾ
ಸುಖ ತಪ್ಪಿತೆ.

ಗಾಳಿಯು ಸೆರೆಯಲ್ಲಿ
ನೀ ನಕ್ಕ ದನಿಯಿದೆ
ನೀರಿನ ತೆರೆಯಲ್ಲಿ
ಸರಿದಂತ ನೆನಪಿದೆ
ಮನಸೆಲ್ಲಾ ಹೊಯ್ದಾಡಿದೆ

ಹೆಣ್ಣಿನ ಹುಡುಗಾಟ
ಕಣ್ಣಾಗ ಕಟ್ಟ್ಯಾದೆ
ನೀ ನುಡಿದು ಪಿಸುಮಾತು
ಕಿವಿಯಾಗೆ ಉಲಿದಿದೆ
ಮನಸೇಕೋ ಮೂಕಾಗಿದೆ

ನೀ ಕೊಟ್ಟ ಎಳೆನೀರು
ಸ್ಪೋರ್‍ತಿ ತಾ ಹರಿದಿದೆ
ನಾ ಕೊಟ್ಟ ಮನಸೆಲ್ಲಾ
ತೆಪ್ಪಾಗಿ ನಿಂತಿದೆ
ಮನಸೆಲ್ಲಾ ಹೊಯ್ದಾಡಿದೆ

—ಬಿ. ಕಲ್ಯಾಣಕುಮಾರ

# ಆ (ಈ) ಕ್ಷಣ

ನಿನ್ನ ನೋಡಿದ
ಆ ಕ್ಷಣ
ಮನವೆಲ್ಲಾ ತಲ್ಲಣಿಸಿದ
ಈ ಕ್ಷಣ
ನೀನು ನೋಡಿ ನಕ್ಕ
ಆ ಕ್ಷಣ
ಮನಸೆಲ್ಲ ನಿನ್ನಲ್ಲಿಯೇ
ಈ ಕ್ಷಣ
ನೀನು ವಿಶ್ ಹೇಳಿದ
ಆ ಕ್ಷಣ
ನನ್ನ ಹೃದಯ ಅರಳಿದ
ಈ ಕ್ಷಣ
ನೀನು ಮಾತನಾಡಿಸಿದ
ಆ ಕ್ಷಣ
ನಾ ನಿನ್ನವನಾದ
ಈ ಕ್ಷಣ
ಕಡೆಗೊಮ್ಮೆ
ನೀನು ಕೈಕೊಟ್ಟ
ಆ ಕ್ಷಣ
ನನಗೆ ಹುಚ್ಚಿಡಿದ
ಈ ಕ್ಷಣ

–ಕರ್ಜಗಿ ಸದ್ಯೋಜಾತ

## ಯಾಕ

ಚಂದ್ರಮ ಬಂದ್ರೂ
ಕೂಡ
ಹಾಲ್ಚೆಲ್ದಂಗ ಬೆಳ್ದಿಂಗ್ಳು
ಮೂಡ್ಲಿಲ್ಲ್ಯಾಕ ?
ಕರಿಮೋಡ ಅಡ್ಡಡ್ಡ ಬಂದಿದ್ದಕ್ಕ !
ಹರೇದ ಹುಡ್ಗಿ
ಎದುರ್ಗೆ ನಿಂತ್ರೂಕೂಡಾ
ಮನ್ಸಿಗೆ ಮುದ ಅನ್ಸಿಲ್ಲ್ಯಾಕ ?
ಬರೀ ಕಣ್ಣಷ್ಟ ಕೂಡಿ
ಮನಸ್ಸು ಕೂಡ್ಲಿಲ್ಲದ್ದಕ್ಕ.

**-ಪ್ರಕಾಶ ಮಲ್ಕಿಒಡೆಯರ್**

# ಪ್ರಶ್ನೆ

ಶ್ವೇತಾ
ನೀನು ಯಾವಾಗಲೂ
ಮಂದಸ್ಮಿತೆ
ತುಟಿಯ ಮೇಲೆ ಮೂಡಿಬಂದ
ತಿಳಿನಗೆ
ಜೀವನದ ಸಂತಸದ ಸಂಕೇತ !
ನೀನು ಶ್ವೇತಾಂಬರಿ,
ಮುಗುಳು ನಗೆಯಿಂದ
ಸ್ವಾಗತಿಸಿದಾಗ
ಬಯಕೆಗಳು ಉಕ್ಕಿದಾಗ !
ನೀ
ತೋಳ ಬಂಧಿಯಾದೆ
ಈ ಬದಕೊಂದು ಸುಂದರಸಾಗರ
ಕಾಣುವ ಕನಸುಗಳು
ಪ್ರಾಯದ ತಿನುಸುಗಳು
ಬೆರತ ಮನಸುಗಳು
ಮುಂದಿನ ಸುಂದರ ದಿನಗಳ
ಬದುಕಿನ
ನಾಂದಿ ಹಾಡಲು ಬರುವೆಯಾ ?

-ಪಾರ್ವತಿಸುತ

# ಅಮ್ಮ

ಕಣ್ಣೀರ ಹರವಿನಲ್ಲೂ,
ನೋವುಗಳ ಭರದಲ್ಲೂ
ಚಡಪಡಿಕೆಯ ತನವಿನಲ್ಲೂ
ಕಾರ್ಗತ್ತಲೆಯ ಮಿಂಚಿನಲ್ಲೂ
ಬಾಯಾರಿಕೆಯ ಬಾಯಲ್ಲೂ
ಅಮ್ಮಾ-ಅಮ್ಮಾ ಎನ್ನುವ
ದೀರ್ಘ ಉಸಿರು ಹೊರಚಲ್ಲಿ
ಹೊರ ಬಂದೆ ಅಮ್ಮಾ
ನೋವುಗಳ ತವರಿನಲ್ಲಿ
ಕೊನೆಯುಸಿರಿನ ಗಾಳಿಯಲ್ಲಿ
ನರ-ನರಗಳ ನೋವ್ವಿನಲ್ಲಿ
ಎಳೆಯಾದ ಧ್ವನಿಚಲ್ಲಿ
ಅಮ್ಮಾ-ಅಮ್ಮಾ
ಏರಿಳಿತದ ನೋವಿನಲ್ಲಿ
ಸಂಕಟದ ಸಮಯದಲ್ಲಿ
ಹುಟ್ಟಿದೆ ನಿನ್ನುದರದಲ್ಲಿ
ಹೊತ್ತು ಹೆತ್ತಭಾರಕ್ಕೆ
ಋಣಿ ಅಮ್ಮಾ
ನಾ ಚಿರಋಣಿ

-ಎಲ್. ಖಾದರ್‌ಭಾಷ

# ಅಂತರ್ಮುಖಿ

ಆರಾಂಭ್ಯಾಂತವಿಲ್ಲದ ಪರಧಿಯೊಳಗೆ
ನನಸಾಗದಾ ಕನಸುಗಳ ಪರದೆಯೊಳಗೆ
ಚಡಪಡಿಸಿ ಬಡ ಬಡಿಸಿದರೂ ಬೇಯದಿಹ
ಕಲ್ಲು ಹೃದಯದ ಮೇಲೆ
ಹಿಂದಿನ ಕುರುಹು
ಕಟೆವುದೇತಕೆ ದು:ಖಿ ?

ಹೌದು ಹೌದು ನೀನು ಅಂತರ್ಮುಖಿ
ನಿನ್ನೆಯನು ಕೆದಕುತಾ
ನಾಳೆಯನು ಹುಡುಕುತಾ
ಕೂಡುವೆಯಾ ನೀನು ಸಮಯವ ನೂಕುತಾ ?
ಅಲ್ಲ ! ನಿನ್ನ ಬದುಕಿನಾಯಸ್ಸನ್ನು ಕಳೆಯುತಾ
ಏಳು, ಮೇಲೇಳು
ಧೈರ್ಯದ ಕೋಲನೂರುತಾ
ಲೋಕದ ಬಾಹ್ಯಮುಖವನ್ನು
ನಿರೀಕ್ಷಿಸುವುದು ಬೆಪ್ಪು
ನೀನು ಅಂತರ್ಮುಖಿಯಾಗಿ
ಕೂಡುವುದು ತಪ್ಪು.

—ಚಿ. ಸುರೇಂದ್ರ

# ನನ್ನವಳು

ಕಣ್ಗಳ ಕುಣಿಸುತ
ಮನ ಮನು ತಣಿಸುತ
ನಡೆದಿಹ ಹುಡುಗಿ
ಯಾರಿವಳು ?
ಗೆಜ್ಜೆಯಸದ್ದಿನ
ಹೆಜ್ಜೆಯನಿಕ್ಕುವ
ಚಲುವಿನ ಸುಂದರಿ
ಯಾರಿವಳು ?
ಬಯಕೆಯ ಬಲೆಯಲಿ
ನನ್ನನು ಭಂಧಿಸಿ
ಓಡುವ ಹುಡುಗಿ
ಯಾರಿವಳು ?
ಮನಸಿನತುಂಬ
ಕನಸನು ಮೂಡಿಸಿ
ಕಾಡುವ ಹುಡುಗಿ
ಯಾರಿವಳು ?
ಮನವನು ತುಂಬಿಸಿ
ಕೆನ್ನೆಯು ಚುಂಬಿಸಿ
ಹಾರುವ ಕನ್ಯೆ
ಯಾರಿವಳು ?
ಬಾಳಲಿ ಹೊಕ್ಕು
ತೋಳಲಿಸಿಕ್ಕು
ಜೊತೆಯಲಿ ನಡೆದಿಹ
ಅವಳೇ–ಇವಳು
ನನ್ನವಳು

**-ಡೊಂಗರ್ ಚಂದ್**

# ಮಾಸ್ತರ

ಮಾಸ್ತರಂತ ಹೆಳ್ತಾರಲ್ಲ
ಪಾಠ ಮಾತ್ರ ಮಾಡೋದಿಲ್ಲ
ಮಾಸ್ತರಪೋ ಇವರು ಮಾಸ್ತ್ರರು.

ಟೈಂ ಆಗಿ ಬರ್ತಾರಲ್ಲಾ
ತಿಂಡಿ ಕಾಫಿಗೆ ಹೋಗ್ತಾರಲ್ಲ
ಕ್ಲಾಸಿನಲ್ಲಿ ಬರ್ತಾರಲ್ಲ
ಮಾಸ್ತರ ಅನಿಸಿಕೊಂಡ ಹೋಗ್ತಾರಲ್ಲ

ಸಿಲೆಬಸ್ ಅಂತ ಹೇಳ್ತಾರಲ್ಲ
ಸಿಗಲಾರ್ದೆ ಹೋಗ್ತಾರಲ್ಲ
ಕೇಳಿದರೆ ಇವರು ನಾಳೆ ಅಂತಾ ಹೇಳ್ತಾರಲ್ಲ
ನಾಳೆದರ ಅರ್ಥ ಗುರುತೆ ಇಲ್ಲ

ವರ್ಷದ ಪಾಠ ಮುಗಸ್ತಿವೆಂತ
ಪಂಟಮಾಡಿ ಹೇಳ್ತಾರಲ್ಲ
ಪರೀಕ್ಷೆ ಬಂದರೂ ಇನ್ನು
ಇವರು ಏನು ಹೇಳಿ ಇಲ್ಲ

ಮುಂದಿನ ಪುಟದಾಗ ಹೇಳ್ಯಾರಲ್ಲ
ಕೊನೆಯ ಪುಟವ ತಿರುವ್ಯಾರಲ್ಲ
ಕ್ಲಾಸ್ ಡೇ ಅಂತ ಮಾಡ್ಯಾರಲ್ಲ
ಹುಡುಗರಿಗೆ ಬೀಳ ಕೆಡವೆರಲ್ಲ

ಪರೀಕ್ಷೆಯಲ್ಲಿ ಬಂದಾರಲ್ಲ
ಕಾಪಿ ಮಾಡ್ರಿ ಅಂತಾರಲ್ಲ
ಕೊಟ್ಟಷ್ಟು ಇವರು ತಗೊಂತಾರಲ್ಲ
ಲಂಚ ಮಾತ್ರ ತಿನ್ನೋದಿಲ್ಲ ಅಂತಾರಲ್ಲ

ಗುರುಗಳು ಅಂತಾ ಹೇಳ್ತಾರಲ್ಲ
ಗುರಿ ಏನೆಂದು ತಿಳಿದೇ ಇಲ್ಲ
ಈ ಸ್ಥಾನದ ಅರ್ಥ ಗುರುತೇ ಇಲ್ಲ
ಎಂಥ ಗುರುಗಳು ಇವರು ಎಲ್ಲ

-ಶಂCH

# ವಾಸ್ತವ



ಬಾಯಿ ಇದ್ದವ ಬೆಂಗಳೂರಿಗೆ ಹೋಗಬೇಕಂತ
ಕಾಸು ಇದ್ದವ ಕಾಶೀಗೆ ಹೋಗ್ಬೇಕಂತ
ಎರಡೂ ಇಲ್ಲಾದವ–ಸುಡುಗಾಡಿಗೆ ಹೋಗ್ಬೇಕಂತ”

“ಬೆಂಗ್ಳೂರಾಗ ಬೀರ್ ಬಾರ್ ಅಂಗಡಿ ಬಹಳ ಅಗ್ಯಾವ್
ಮನಿ ಮಂದಕಡೇ, ಆಫೀಸ್‌ಮಂದಕಡೇ ಆಗ್ಯಾವ್
ಮನಿಗೇ ಬರೋದ್ರೊಳಗೆ ಮಸುಡಿ ಅನ್ನುವು
ಮಂಗ್ಯಾಸಂಗ್ ಆಗೇವ್”



“ಹೋಗ ಮುಂದ ಹಿಡ್ಕೊಂಡು ಹೋಗ್ಯಾರ್ ತಲೆಗೊಂದೊಂದು
ಬರೋ ಮುಂದ, ತಿಂದು ಆದರಾಗ ತುಂಬ್ಕೊಂಡು ಬಂದಾರ್
ಬಕ್ಕಣದಾಗ ರೊಕ್ಕ ತುಂಬ್ಕೊಂಡು ಬಂದಾರ”

“ಬೆಂಗಳೂರ್ ಬಜಾರ್ ಬಾಯ್ ಬಾಯ್ ಬಿಡಂಗ ಆಗೈತಿ”
ಥೈ, ಥೈ ಎಂದು ಕುಣಿದಾವ್ ಬಾರ್ ಅಂಗಡ್ಯಾಗ
ಬಡವರ ರೊಕ್ಕ ಬೆಂಗಳೂರ್ ಸೇರ್ಯಾವು

“ಬೆಂಗಳೂರಿಗೆ ಆದವ ಆಫಿಸ್ ಬಾಯಿ ಬಾಯಿ ಬಿಡಂಗ್
ಆಫೀಸರ್ ಮಂಡಿ ಆದರ, ನಾನೆಳಕೊಲ್ಲೆ ಆದರ ಸುದ್ಧಿ,
ಸುದ್ಧಿ ಹೇಳಿದ್ರ, ನನಗೆ ಎದ್ದು ಬಂದು ಗುದ್ದ್ರೀ,

“ಬೆಂಗ್ಳೂರಾಗ ಬಡವರು ಭೀಕಾರಿಗಳಾಗ್ಯಾರ
ಭೀಕಾರಿಗಳು ಬೆಂಗ್ಳೂರಾಗ್ ಭಾರಿ ಆಗ್ಯಾರ್
ಭಾರಿ ಆಗ್ಯಾರ್ ಅಂತಾ ಭಾರಿ ಮಾಡ್ತಾರ ಬೆಂಗ್ಳೂರಾಗ

“ಮುದುಕರು ಹುಡುಗರು ಆಗ್ಯಾರ್
ಮುದುಕಿಯರು ಹುಡುಗಿಯರು ಆಗ್ಯಾರ್
ಮುದುಕ ಮುದುಕಿ ಕೂಡ ಮೋಜ್ ಮಾಡ್ಯಾರ್,

ಹುಡುಗರು ಹರೇವ್ ಕಳ್ಕೊಂಡು ಹೇಡಿಗಳ್ ಆಗ್ತ್ಯಾರ್
ಹುಡುಗಿಯರು ಯೌವ್ವನ ಕಳ್ಕೊಂಡು ಮತ್ತನ್ಯಾಗ ಆಗ್ತ್ಯಾರ್
ಹುಡುಗರು ಹುಡುಗಿಯರು ಸೇರಿ ಓಡಿ ಹೋಗ್ತ್ಯಾರ್"

-**ಕೆ. ದಯಾನಂದಗೌಡ**, ಎಂ. ಎ.

# ಸ್ಥಿತ ಪ್ರಜ್ಞ

ಬೆದರಿಸದು ಬಿರುಗಾಳಿ ಅಂಜಿಸದು ಬರಸಿಡಿಲು
ಒಣಗಿಸದು ಉರಿಬಿಸಿಲು ಕಡುಛಳಿ ನಡಗಿಸದು
ನಿಂದೆಯುಳುಕಿಸದು ಕಷ್ಟಗಳು ಬಗ್ಗಿಸವು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ನಾನೊಂದು ದಿನ ಸುಂದರಾಂಗಗಳ ಧರಿಸಿದ್ದೆ
ಪತ್ರ ಫಲಪುಷ್ಪಗಳಿಂದ ನಳ ನಳಿಸುತ್ತಿದ್ದೆ
ವನ್ಯ ಪಶುಪಕ್ಷಿಗಳನಾಕರ್ಷಿಸುತ್ತಿದ್ದೆ
ಮಾನವಗೆ ಫಲ ನೆರಳುಗಳಿನಿತ್ತು ಸಂತೈಸುತ್ತಿದ್ದೆ
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಕೈಗಳ ಕಡಿದನೊಬ್ಬ ಕಣ್ಣು ಕಿವಿಗಳ ಕಿತ್ತನೊಬ್ಬ
ಉಳಿದ ಸಿರಹರಿದು ಕೆಡಹಿದನಿನ್ನೊಬ್ಬ
ಚರ್ಮವನೆ ಸುಲಿದು ಹಾಕಿದ ಮತ್ತೊಬ್ಬ
ಮೋಟುಮರ ಮಾಡಿದರು ಹೊರಟು ಹೊದರು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಮಿತ್ರರೇ ಶತೃಗಳಾದರು ಹಾಳು ಮಾಡಿದರು
ರಕ್ಷಕರೇ ಭಕ್ಷಕರಾಗಿ ಚಿತ್ರಹಿಂಸೆ ಕೊಟ್ಟರು
ಸಿರಿದೊರೆಯಾದ ನನ್ನ ಬರಿಗೈಯ ಮಾಡಿದರು
ನನ್ನಂಗಗಳನೆಲ್ಲ ಕಡಿದು ಕೆಡಹಿದರು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಉತ್ಸಾಹ ಹೊನಲ ಹೊಸಕಿ ಹಾಕಿದರು
ಚೇತನ ಚಿಲುಮೆ ಬತ್ತಿಸಿದರು
ಸೌಂದರ್ಯವನೆಲ್ಲ ಕೊಂಡು ಹೋದರು
ಕಡುಬಡವನಿವನೆಂದು ಬಿರುದು ಕೊಟ್ಟರು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಸತ್ತ ಶವನೆನ್ನಲೇ ಉಸಿರಾಟವಿಹುದು
ಬದುಕಿದವನೆನ್ನಲೇ ಬರುಡ ಜೀವನವು
ಝುರಿ ಬತ್ತಿ ಬರಿಮರಳು ಉಳುದಿಹದು
ನಿರಾಶೆಯ ಕತ್ತಲು ಕವಿದಿವುದು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಎನ್ನಿಪರಿಯ ನೋಡಿ ಮರುಗುವರು ಕೆಲವರು
ಭಾವ ಜೀವಿಗಳು ಕಣ್ಣೀರು ಸುರಿಸುವರು
ಎನಗೆ ಮರಳಿ ಜೀವನ ಕೊಡುವ ಚಿಂತನೆ ನಡೆಸಿಹರು
ಕೊಂಡು ಕೊನರಿಸುವ ಯತ್ನಗೈಯುವರು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುಉದು ನಿರ್ವಿಘ್ನ

ಓ ಗೆಳೆಯಾ ! ಎನ್ನ ಚಿಂತೆಎನಗೆಳ್ಳಷ್ಟಿಲ್ಲ
ಎನ್ನಕ್ಕ ಪಕ್ಕದಿ ಬೆಳೆದ ಮಕ್ಕಳಾಚಿಂತೆ
ಕೆಲವಕ್ಕೆರಡು ಕೆಲವಕ್ಕೆ ನಾಲ್ಕೆಲೆಗಳು
ಕೆಲವಕ್ಕೆ ಹೊಸರಂಬೆ ಕೊಂಬೆಗಳು ಮೂಡಿಹವು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಈ ಮಕ್ಕಳ ಬೆಳೆಸಿರಿ ನೀರುಣಿಸಿರಿ
ಇವರತಲೆಗಾಹಿರಿ ಫಲಬಿಡುವಂತೆ ಮಾಡಿರಿ
ನಿಮ್ಮ ದಯೆಗಾಗಿ ಬೇಡುತಲಿಹೆನು
ಇವರ ರಕ್ಷಿಸಿರೆಂದು ಪ್ರಾರ್ಥಿಸುವೆನು
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

ಕಡುಬಡವನೆನ್ನೆಡೆ ಬರಲಿ ಕಡಿದೆನ್ನ ತುಂಡು ಮಾಡಲಿ
ಹೊರೆಕಟ್ಟಿ ಮಾರಲಿ ಹಣ ಪಡೆಯುಲಿ
ತನ್ನ ಹಸಿದ ಮಕ್ಕಳ ಹಸಿವಹಿಂಗಿಸಲಿ
ಎನ್ನ ಕೊನೆಯಾಸೆ ಫಲಿಸಲಿ ಜೀವನಸಾರ್ಥಕವಾಗಲಿ
ನಾನೊಬ್ಬ ಸ್ಥಿತಪ್ರಜ್ಞ ಕಾಲ ಉರುಳುವುದು ನಿರ್ವಿಘ್ನ

–**ಟಿ. ವಿರುಪಾಕ್ಷಪ್ಪ** ಎಂ. ಎ. ಬಿ. ಎಡ್.

## ನೊಂದವರಿಗಾಗಿ

ಇದು ನಿಮಗಲ್ಲ
ನೀವು ಓದಲೆಂದಲ್ಲ
ನಾನು ಭಾವನೆಗಳ ಬಿಗಿತದಬಂಧಿ
ಇಲ್ಲಿ ಹೆಣ್ಣುಗಳ ಕಣ್ಣಹನಿ
ಕಾವ್ಯದಲ್ಲಿ ಬೆರೆಯುತ್ತದೆ
ದುಡಿಯುವವರ ಬೆವರಹನಿ
ಕವಿತೆಯಾಗಿ ಹರಿಯುತ್ತದೆ
ನಾನು ಬರೆಯುತ್ತೇನೆ
ನೊಂದವರ ನೋವ್ವಿಗಾಗಿ !
ಬೆಂದವರ ನೆನಪಿಗಾಗಿ
ಇಲ್ಲಿ ಬಯಕೆಗಳು ಭಾರವಾಗಿವೆ
ಕನಸುಗಳು ದೂರವಾಗಿವೆ
ನಾನು ಖಾರವಾಗಿದ್ದೇನೆ
ಕಾರಣ ನಿಮ್ಮಿಂದ ದೂರವಾಗಿದ್ದೇನೆ
ಇಲ್ಲಿ ನೋವುಗಳು ಹೂವುಗಳಂತೆ ಉದುರಿ
ಕಲ್ಪನೆಗಳು ಎಲೆಗಳಂತೆ ಮುದುರಿ
ಮುಟ್ಟೆಯಾಗುತ್ತವೆ
ನಾನು ಗಟ್ಟಿಯಾಗುತ್ತೇನೆ
ಇಲ್ಲಿ ನುಡಿಗಳು ಖಿಡಿಗಳಾಗಿ
ಸಿಡಿಯಬೇಕಿದೆ !
ಹೃಧಯ–ಹೃಧಯಗಳನ್ನು
ಮಿಡಿಯಬೇಕಿದೆ
ದುಡಿಯಬೇಕಿದೆ ಮಣ್ಣಲ್ಲಿ–ಮಣ್ಣಾಗಿ
ನಿಮ್ಮೆಲ್ಲರ ಕಣ್ಣಿನ ಕಣ್ಣಾಗಿ

–ಸ. ಪ್ರಭಾಕರ

# ಕಟ್ಟಿಡು ಕಣ್ಣಿಡು

ಕವನಗಳ ಕುಟ್ಟುತ್ತ
ಕೊಡ್ರುಬೇಡ

ಕಾಡೆಲ್ಲ ಕಾಗದವಾಗಿ
ಕನಸುಗಳೆಲ್ಲ ಕವನಗಳ ಸರಕಾಗಿ
ಕಾಡು ಕಣ್ಣೀರಿಡುತ್ತಿದೆ
ಕಾಂಕ್ರಿಟಾಗಿದೆ ಕಾಡಿಂದು

ಕಾಗದ ಕುದುರೆ ಮೇಲೆ ಕುಳಿತು
ಕಿರುಚುವಿಯಲ್ಲ ಕ್ರಾಂತಿಯೆಂದು
ಕಾದ ಹೊಟ್ಟೆಯಿಂದ ನಿನ್ನಾಕೆ
ಕಾಗೆಯಂತೆ ಕಾ-ಕಾ ಎಂದರೂ
ಕಿವುಡನಂತೆ ಕವಿತೆಯಲೇ
ಕರಗುವಿಯಲ್ಲ
ಕಥೆಯಲಿ ಮುಳುಗುವಿಯಲ್ಲ

ಕಾರಣಿಕನಾಗಬೇಡ ಕವಿ
ಕಾಲದ ಬಂಡಿ ತನ್ನಷ್ಟಕ್ಕೆ ತಾನೆ
ಕಥೆ-ಕವನಗಳ ಕುಟ್ಟುತ್ತಿರುತ್ತದೆ
ಕನಸುಗಳು ಕಥೆ ಹೆಣೆಯುತಿರುತ್ತದೆ
ಕಟ್ಟಿಡು ಕವನಗಳ ಕಟ್ಟು
ಕಣ್ಣಿಡು ಜೀವನದ ಗುಟ್ಟು.

**-ಜೆ. ಪದ್ಮರಾಜ,**

# ಕವಿತೆ ಬರೆದವರ ವಿಳಾಸ

1 **ಶ್ರೀ ಗಂಗಾಧರ ಸ್ವಾಮೀಜಿ,**
ಕಂಬಾಳಿಮಠ ಬಳ್ಳಾರಿ. ಮುಕ್ಕಾಂ ಹರಿಹರ.

2 **ವಾಸುದೇವನಾಡಿಗ**, ಮನೆ ನಂ. 10-2/130
ಆನಂದನಗರ ಗುಲ್ಬರ್ಗಾ-3

3 **ಎಂ. ಎಲ್. ಚಂದ್ರಿಕಾ, ಮಾಗೋಡ್,**
ಹೊನ್ನಾವರ (ಉ. ಕ.) 581395

4 **ಕೆ. ರುದ್ರಪ್ಪ**, ಕನ್ನಡ ಅಧ್ಯಾಪಕ ಜಿ. ಬಿ. ಆರ್. ಕಾಲೇಜ್
ಹೂವಿನಹಡಗಲಿ.

5 **ಚಂದ್ರಶೇಖರ ಬೆನ್ನೂರು**, ಭೂ ಅಭಿವೃದ್ಧಿ ಬ್ಯಾಂಕ್
ಹೂವಿನಹಡಗಲಿ.

6 **ವಿ. ಅರುಣಕುಮಾರ್** ಬಿ. ಎ. ಪ್ರಥಮ.
ಜಿ. ಬಿ. ಆರ್. ಕಾಲೇಜ್ ಹೂವಿನಹಡಗಲಿ.

7 **ಹೆಚ್. ಶೇಷಗಿರಿರಾವ್**, ಕೇಶವ ದೇವರ ಗುಡಿ ಎದುರು
ಹೂವಿನಹಡಗಲಿ.

8 **ಎನ್. ಎಂ. ಕೊಟ್ರೇಶ್**, ಸಾಂಕಿಕ ನಿರೀಕ್ಷಕರು
ತಾಲೂಕು ಕಛೇರಿ, ಹರಪನಹಳ್ಳಿ.

9 **ಪಿ. ಆರ್. ವೆಂಕಟೇಶ್**, ಹೂವಿನಹಡಗಲಿ.

10 **ಬಿ. ಪೀರಭಾಷ**, ಬಿ.ಎ. ದ್ವಿತೀಯ
ಜಿ. ಬಿ. ಆರ್ ಕಾಲೇಜ ಹೂವಿನಹಡಗಲಿ

11 **ಶಾಂತಮೂರ್ತಿ ಕುಲಕರ್ಣಿ** ಇಂಗ್ಲೀಷ ಉಪನ್ಯಾಸಕರು
ಜಿ. ಆರ್. ಕಾಲೇಜ್ ಹೂವಿನಹಡಗಲಿ.

12 **ಬಿ. ಕಲ್ಯಾಣಕುಮಾರ್**, ಕನ್ನಡ ಉಪನ್ಯಾಸಕರು.
ಜಿ. ಬಿ. ಆರ್ ಕಾಲೇಜ್ ಹೂವಿನಹಡಗಲಿ

13 **ಕರ್ಜಿಗಿ ಸದ್ಯೋಜಾತ** ಅಮರ ಏಜನ್ಸಿಸ್ ಹಿರೇಹಡಗಲಿ.

14 **ಪ್ರಕಾಶ ಮಲ್ಕಿಒಡೆಯರ್** ಅಂಚೆ ಹಂಪಾಪಟ್ಟಣ
ತಾ. ಹಗರಿಬೊಮ್ಮನಹಳ್ಳಿ

15 **ಹೆಚ್. ಪಿ. ಶಿವಶಂಕರಪ್ಪ,** ಮುಖ್ಯರಸ್ತೆ ಹೂವಿನಹಡಗಲಿ.

16 **ಎಲ್ ಖಾದರ್‌ಭಾಷ,** ಬಿ. ಎ. ಪ್ರಥಮ.
ಜಿ. ಬಿ. ಆರ್. ಕಾಲೇಜ್ ಹೂವಿನಹಡಗಲಿ.

17 **ಟಿ. ಸುರೇಂದ್ರ,** ಕೊಂಡೂರು ಬಳ್ಳಾರಿ ಜಿಲ್ಲೆ.

18 **ಡುಂಗರ್ ಚಂದ್,** ಮಂಗಲ್ ಸ್ಟೀಲ್ ಅಂಡ್ ಅಲಾಯ್ಸ್ 19 ಜಿ.
ಆರ್‌ಲೇನ್ ಎಸ್ ಪಿ. ರೋಡ್ ಕ್ರಾಸ್ ಬೆಂಗಳೂರು-560002

19 **ಕಂಠೆಪ್ಪ ಚಂದಪ್ಪ ಹೊಸಮನಿ,** ಐ. ಟಿ. ಐ ಕಾಲೇಜ್
ಹೂವಿನಹಡಗಲಿ.

20 **ಕೆ. ದಯಾನಂದಗೌಡ** ಎಂ. ಎ.
ಇತಿಹಾಸ ಉಪನ್ಯಾಸಕರು ಜಿ. ಬಿ. ಆರ್. ಕಾಲೇಜ್ ಹಡಗಲಿ.

21 **ಟಿ. ವಿರೂಪಾಕ್ಷಪ್ಪ** ಎಂ. ಎ. ಬಿ ಎಡ್.
ಶಿಕ್ಷಕರು ಹೂವಿನಹಡಗಲಿ.

22 **ಸ. ಪ್ರಭಾಕರ,** ಕೊಯಿಲಾರಗಟ್ಟಿ
ಮುಖ್ಯರಸ್ತೆ ಹೂವಿನಹಡಗಲಿ.

23 **ಜೆ. ಪದ್ಮರಾಜ,** ಬಿ. ಎ. ದ್ವಿತೀಯ
ಜಿ. ಬಿ. ಆರ್. ಕಾಲೇಜ್ ಹೂವಿನಹಡಗಲಿ.